# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 650

ಸದಸ್ಯರ ಹೆಸರು : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 17–12–2021.

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಕೆಲವು ಗ್ರಾಮ ಪಂಚಾಯಿತಿಗಳಿಗೆ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳಿಲ್ಲದೆ ಜನ ಸಾಮಾನ್ಯರು ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; | ಬಂದಿದೆ.<br><br>ಆದಾಗ್ಯೂ ಗ್ರಾಮ ಪಂಚಾಯತಿ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳ ಹುದ್ದೆ ನಿವೃತ್ತಿ, ಅಮಾನತ್ತು, ಇನ್ನಿತರೆ ಕಾರಣಗಳಿಂದ ತೆರವಾದಲ್ಲಿ ಆ ಗ್ರಾಮ ಪಂಚಾಯತಿಯಲ್ಲಿ ಗ್ರೇಡ್–1 ಗ್ರಾಮ ಪಂಚಾಯತಿ ಕಾರ್ಯದರ್ಶಿಯು ಪೂರ್ಣಕಾಲಿಕವಾಗಿ ಕಾರ್ಯನಿರ್ವಹಿಸುತ್ತಿದ್ದಲ್ಲಿ ಪ್ರಭಾರದಲ್ಲಿರಿಸುವುದು. ಗ್ರೇಡ್–1 ಗ್ರಾಮ ಪಂಚಾಯತಿ ಕಾರ್ಯದರ್ಶಿಯು ಇಲ್ಲದಿದ್ದಲ್ಲಿ ನೆರೆಯ ಗ್ರಾಮ ಪಂಚಾಯತಿ ಪಂಚಾಯತಿ ಅಭಿವೃದ್ಧಿ ಅಧಿಕಾರಿಗೆ ಹೆಚ್ಚುವರಿ ಪ್ರಭಾರ ವಹಿಸಲು ಸರ್ಕಾರದಿಂದ ಎಲ್ಲಾ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ. |
| (ಆ) | ಎಷ್ಟು ಗ್ರಾಮ ಪಂಚಾಯಿತಿಗಳಿಗೆ ಒಬ್ಬರಂತೆ ಒಬ್ಬ ಪಿಡಿಓ ಅಧಿಕಾರಿಯನ್ನು ನೇಮಿಸಲಾಗುತ್ತದೆ; | ಪ್ರತಿ ಗ್ರಾಮ ಪಂಚಾಯಿತಿಗೆ ಒಬ್ಬ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಯನ್ನು ನೇಮಿಸಲು ಅವಕಾಶ ಕಲ್ಪಿಸಲಾಗಿದೆ. |
| (ಇ) | ರಾಜ್ಯದಲ್ಲಿ ಪ್ರಸ್ತುತ ಎಷ್ಟು ಪಂಚಾಯಿತಿಗಳಲ್ಲಿ ಪಿಡಿಓಗಳು ಕಾರ್ಯನಿರ್ವಹಿಸುತ್ತಿದ್ದಾರೆ ಹಾಗೂ ಪಿಡಿಓ ಅಧಿಕಾರಿಗಳಿಲ್ಲದ ಪಂಚಾಯಿತಿಗಳು ಎಷ್ಟು; ಪಿಡಿಓಗಳಿಲ್ಲದ ಗ್ರಾಮ ಪಂಚಾಯಿತಿಗಳ ಪಟ್ಟಿಯನ್ನು ನೀಡುವುದು; | ರಾಜ್ಯದಲ್ಲಿ ಪ್ರಸ್ತುತ 5294 ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದಾರೆ. 727 ಪಂಚಾಯತಿ ಅಭಿವೃದ್ಧಿ ಅಧಿಕಾರಿ ಹುದ್ದೆಗಳು ಖಾಲಿಯಿರುತ್ತವೆ.<br><br>ಜಿಲ್ಲಾವಾರು ಖಾಲಿ ಹುದ್ದೆಗಳ ವಿವರವನ್ನು ಅನುಬಂಧದಲ್ಲಿ ನೀಡಿದೆ. |
| (ಈ) | ಕೆಲವು ಪಿಡಿಓ ಅಧಿಕಾರಿಗಳು (ಎರವಲು ಸೇವೆ) ಮೇಲೆ ಅನ್ಯ ಇಲಾಖೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಇದರಿಂದ ಗ್ರಾಮ ಪಂಚಾಯಿತಿಗಳಲ್ಲಿ ಸರ್ಕಾರಿ ಯೋಜನೆಗಳ ಅನುಷ್ಠಾನಕ್ಕೆ ವಿಳಂಬವಾಗುವುದಿಲ್ಲವೇ; ಈ ಬಗ್ಗೆ ಸರ್ಕಾರದ ನಿಲುವೇನು? (ಸ್ಪಷ್ಟವಾದ ಮಾಹಿತಿ ನೀಡುವುದು) | ಸರ್ಕಾರದ ಪತ್ರ ಸಂಖ್ಯೆ: ಗ್ರಾಅಪ 384 ಗ್ರಾಪಂಕಾ 2018 (ಭಾಗ–1) ದಿನಾಂಕ:23–11–2018 ರಲ್ಲಿ ಮಾನ್ಯ ಸಂಸತ್ ಸದಸ್ಯರು, ರಾಜ್ಯ ಸಭಾ ಸದಸ್ಯರು, ವಿಧಾನ ಸಭೆ / ವಿಧಾನ ಪರಿಷತ್ ಸದಸ್ಯರುಗಳು, ಸಚಿವರುಗಳು ಹಾಗೂ ಜಿಲ್ಲಾ ಪಂಚಾಯತಿ ಅಧ್ಯಕ್ಷರುಗಳ ಕಛೇರಿಗಳಲ್ಲಿ ಮಂಜೂರಾದ ಹುದ್ದೆಗೆ ಎದುರಾಗಿ ಕಾರ್ಯನಿರ್ವಹಿಸುತ್ತಿರುವವರನ್ನು ಹೊರತುಪಡಿಸಿ, ಅನ್ಯ ಕಾರ್ಯನಿಮಿತ್ತ (ಓಓಡಿ) ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು, ಗ್ರಾಮ ಪಂಚಾಯತಿ ಕಾರ್ಯದರ್ಶಿಗಳು ಮತ್ತು ದ್ವಿತೀಯ ದರ್ಜೆ ಲೆಕ್ಕ ಸಹಾಯಕರುಗಳ ನಿಯೋಜನೆಗಳನ್ನು ಕೂಡಲೇ ರದ್ದುಪಡಿಸಿ ಮೂಲ ಸ್ಥಾನಗಳಲ್ಲಿ ವರದಿ ಮಾಡಿಕೊಳ್ಳಲು ಆದೇಶಿಸುವಂತೆ ಎಲ್ಲಾ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ. |

ಸಂಖ್ಯೆ: ಗ್ರಾಅಪ 428 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

ವಿಧಾನ ಪರಿಷತ್ತಿನ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 650 ಕ್ಕೆ ಅನುಬಂಧ

ಗ್ರಾಮ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳ ಹುದ್ದೆಗಳ ಜಿಲ್ಲಾವಾರು ವಿವರ

| ಕ್ರ.ಸಂ | ಜಿಲ್ಲೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಕರ್ತವ್ಯ ನಿರ್ವಹಿಸುತ್ತಿರುವ ನೌಕರರ ಒಟ್ಟು | ಖಾಲಿ ಇರುವ ಹುದ್ದೆಗಳ ಒಟ್ಟು |
|---|---|---|---|---|
| 1 | 2 | 3 | 4 | 5 |
| 1 | ಬೆಂಗಳೂರು ಗ್ರಾಮಾಂತರ | 105 | 101 | 4 |
| 2 | ಬೆಂಗಳೂರು ನಗರ | 96 | 96 | 0 |
| 3 | ಕೋಲಾರ | 156 | 133 | 23 |
| 4 | ಶಿವಮೊಗ್ಗ | 271 | 240 | 31 |
| 5 | ಚಿತ್ರದುರ್ಗ | 189 | 186 | 3 |
| 6 | ರಾಮನಗರ | 127 | 124 | 3 |
| 7 | ಚಿಕ್ಕಬಳ್ಳಾಪುರ | 157 | 142 | 15 |
| 8 | ದಾವಣಗೆರೆ | 196 | 151 | 45 |
| 9 | ತುಮಕೂರು | 331 | 280 | 51 |
| 10 | ಧಾರವಾಡ | 144 | 126 | 18 |
| 11 | ಉತ್ತರ ಕನ್ನಡ | 231 | 183 | 48 |
| 12 | ಗದಗ | 122 | 98 | 24 |
| 13 | ಬೆಳಗಾವಿ | 506 | 474 | 32 |
| 14 | ಹಾವೇರಿ | 224 | 186 | 38 |
| 15 | ಬಾಗಲಕೋಟೆ | 198 | 193 | 5 |
| 16 | ವಿಜಯಪುರ | 213 | 208 | 5 |
| 17 | ಚಿಕ್ಕಮಗಳೂರು | 227 | 200 | 27 |
| 18 | ಉಡುಪಿ | 158 | 141 | 17 |
| 19 | ದಕ್ಷಿಣ ಕನ್ನಡ | 230 | 200 | 30 |
| 20 | ಕೊಡಗು | 104 | 80 | 24 |
| 21 | ಮಂಡ್ಯ | 233 | 219 | 14 |
| 22 | ಹಾಸನ | 267 | 256 | 11 |
| 23 | ಮೈಸೂರು | 266 | 255 | 11 |
| 24 | ಚಾಮರಾಜನಗರ | 130 | 103 | 27 |
| 25 | ರಾಯಚೂರು | 179 | 145 | 34 |
| 26 | ಬೀದರ್ | 185 | 153 | 32 |
| 27 | ಬಳ್ಳಾರಿ | 236 | 183 | 53 |
| 28 | ಯಾದಗಿರಿ | 123 | 105 | 18 |
| 29 | ಕಲಬುರಗಿ | 264 | 197 | 67 |
| 30 | ಕೊಪ್ಪಳ | 153 | 136 | 17 |
| ಒಟ್ಟು | | **6021** | **5294** | **727** |